# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : **177**
**ಸದಸ್ಯರ ಹೆಸರು** : ಶ್ರೀ ಎಂ.ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 13.09.2021
**ಉತ್ತರಿಸುವ ಸಚಿವರು** ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸೌರಶಕ್ತಿ ವಿದ್ಯುತ್ ಮೇಲ್ಛಾವಣಿ (ಸೋಲಾರ್ ರೂಫ್ ಟಾಪ್) ಪ್ರೋತ್ಸಾಹಿಸಲು ಇಲಾಖೆ ಕೈಗೊಂಡಿರುವ ಕ್ರಮಗಳೇನು; ಇದರಿಂದ ರಾಜ್ಯದಲ್ಲಿ ಎಷ್ಟು ಮೆಗಾವ್ಯಾಟ್ ವಿದ್ಯುತ್ ಉತ್ಪಾದಿಸಲಾಗುತ್ತಿದೆ; | ಸೌರನೀತಿ 2014-21 ರನ್ವಯ ಸಾರ್ವಜನಿಕರು ಗ್ರಿಡ್ ಸಂಪರ್ಕಿತ ಸೌರವಿದ್ಯುತ್ ಮೇಲ್ಛಾವಣಿ ಘಟಕಗಳನ್ನು ನೆಟ್ ಅಥವಾ ಗ್ರಾಸ್ (Gross) ಮೀಟರಿಂಗ್ ವಿಧಾನದ ಮೂಲಕ ಅಳವಡಿಸಿಕೊಳ್ಳಲು ಅನುಮೋದನೆ ನೀಡಲಾಗಿರುತ್ತದೆ. ಗ್ರಾಹಕರು ತಮ್ಮ ಸ್ವಾವರದಲ್ಲಿ ಅಳವಡಿಸಿರುವ ಸೌರಶಕ್ತಿ ಮೇಲ್ಛಾವಣಿ ಘಟಕಗಳಿಂದ ಉತ್ಪಾದಿಸುವ ವಿದ್ಯುತ್‌ನ್ನು ತಾವು ಗ್ರಿಡ್‌ನಿಂದ ಪಡೆದ ವಿದ್ಯುಚ್ಛಕ್ತಿಗಿಂತ ಹೆಚ್ಚುವರಿಯಾಗಿದ್ದು, ವಿದ್ಯುತ್ ಸರಬರಾಜು ಕಂಪನಿಗಳ ಗ್ರಿಡ್‌ಗೆ ಪೂರೈಸಿದ್ದಲ್ಲಿ, ಸದರಿ ಘಟಕಗಳಿಂದ ಉತ್ಪಾದನೆಯಾಗುವ ವಿದ್ಯುತ್‌ಗೆ ಕಾಲಕಾಲಕ್ಕೆ ಕೆ.ಇ.ಆರ್.ಸಿ ನಿಗದಿಪಡಿಸುವ ವಿದ್ಯುತ್ ದರವನ್ನು ನೀಡಲಾಗುತ್ತಿದೆ.<br><br>ಸೌರಶಕ್ತಿ ಮೇಲ್ಛಾವಣಿ ಯೋಜನೆಯನ್ನು (ಸೋಲಾರ್ ರೂಫ್ ಟಾಪ್) ಪ್ರೋತ್ಸಾಹಿಸಲು, ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:<br><br>• ಸೌರಶಕ್ತಿ ಮೇಲ್ಛಾವಣಿ ಪಿವಿ ವ್ಯವಸ್ಥೆಗೆ ಸಂಬಂಧಿಸಿದ ಗ್ರಾಹಕರ/ವಿದ್ಯುತ್ ಸರಬರಾಜು ಕಂಪನಿಗಳ ಅಧಿಕಾರಿಗಳ ಕೈಪಿಡಿ, ಸರ್ಕಾರದ ಅಧಿಕೃತ ಜ್ಞಾಪನಾ ಪತ್ರಗಳು ಹಾಗೂ ಸುತ್ತೋಲೆಗಳನ್ನು ವಿದ್ಯುತ್ ಸರಬರಾಜು ಕಂಪನಿಗಳ ಅಂತರ್ಜಾಲದಲ್ಲಿ ಪ್ರಕಟಿಸಲಾಗಿದ್ದು ಹಾಗೂ ಆನ್‌ಲೈನ್ ಮೂಲಕವೇ ಅರ್ಜಿಗಳು ಹಾಗೂ ನೋಂದಣಿ ಶುಲ್ಕ ಪಾವತಿಸಲು ಸಾಫ್ಟ್ ವೇರ್ ಸಿದ್ಧಪಡಿಸಲಾಗಿರುತ್ತದೆ.<br>• ವಾರ್ತಾ ಪತ್ರಿಕೆ, ನಿಯತ ಕಾಲಿಕೆಗಳು, ಸ್ಮರಣ ಸಂಚಿಕೆ ಫೇಸ್ ಬುಕ್, ದೂರದರ್ಶನ, ಆಕಾಶವಾಣಿ, ಬಿಗ್ ಎಫ್ ಎಂ.ಗಳು, ಭಿತ್ತಿ ಪತ್ರಗಳು, ಕರ ಪತ್ರಗಳು, ಕೈಪಿಡಿಗಳಲ್ಲಿ ಜಾಹೀರಾತನ್ನು ನೀಡುವುದರ ಮೂಲಕ ಸೌರಶಕ್ತಿ ಮೇಲ್ಛಾವಣಿ ವಿದ್ಯುತ್ ಉತ್ಪಾದನೆಗೆ ಪ್ರೋತ್ಸಾಹಿಸಲು ಕ್ರಮ ಕೈಗೊಳ್ಳಲಾಗಿದೆ.<br>• ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ದಿನಾಂಕ15-09-2017ರ ಆದೇಶದಲ್ಲಿ ಒಂದೇ ಆವರಣದಲ್ಲಿ **Multiple SRTPV Units** ಅಳವಡಿಸಲು ಅನುಮೋದನೆ ನೀಡಿರುತ್ತದೆ. |

...2

ಭಾರತ ಸರ್ಕಾರದ ಎಮ್.ಎನ್.ಆರ್.ಇ (Ministry of New and Renewable Energy) (ಹಂತ-2) ರವರಿಂದ ವಸತಿ ಕಟ್ಟಡಗಳು ಮತ್ತು ಗುಂಪು ವಸತಿ ಸಮುದಾಯ /ವಸತಿ ಕಲ್ಯಾಣ ಸಂಘದ ಗ್ರಾಹಕರುಗಳಿಗೆ ಗ್ರಿಡ್ ಸಂಪರ್ಕಿತ ಸೌರ ಮೇಲ್ಛಾವಣಿ ಸ್ಥಾಪಿಸಲು 1 ಕಿ.ವ್ಯಾ.ಯಿಂದ 10 ಕಿ.ವ್ಯಾ.ವರೆಗೆ ಸಹಾಯಧನ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ.

<u>ಸಹಾಯಧನದ ವಿವರಗಳು:</u>

| ಗ್ರಾಹಕರು | ಸೌರಶಕ್ತಿ ಮೇಲ್ಛಾವಣಿಯ ಸಾಮರ್ಥ್ಯ | ಸಹಾಯಧನ |
|---|---|---|
| ವಸತಿ ಗ್ರಾಹಕರಿಗೆ | 1-3ಕಿ.ವ್ಯಾ.ವರೆಗೆ | 40% |
| | >3-10ಕಿ.ವ್ಯಾ.ವರೆಗೆ | 20% |
| ಗುಂಪು ವಸತಿ ಸಮುದಾಯ/ ವಸತಿ ಕಲ್ಯಾಣ ಸಂಘದ ಗ್ರಾಹಕರಿಗೆ | 500ಕಿ.ವ್ಯಾ.ವರೆಗೆ | 20% |

- ಸೌರವಿದ್ಯುತ್ ಉತ್ಪಾದನೆಗೆ ಹೆಚ್ಚು ಒತ್ತು ನೀಡಲು ಕೆ.ಇ.ಆರ್.ಸಿ. ರವರು ಹಾಲಿ ಚಾಲ್ತಿಯಲ್ಲಿರುವ ಗ್ರಾಹಕರ ಹೂಡಿಕೆ ವ್ಯವಹಾರ ಮಾದರಿಯೊಂದಿಗೆ, ಮೂರನೇ ವ್ಯಕ್ತಿ ಹಾಗೂ ವಿದ್ಯುತ್ ವಿತರಣಾ ಕಂಪನಿಗಳು ಹೂಡಿಕೆ ಮಾಡಬಹುದೆಂದು ದಿನಾಂಕ: 09.12.2019 ರಂದು ಆದೇಶವನ್ನು ಹೊರಡಿಸಿರುತ್ತಾರೆ.
- ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ನಿಗಮ ಕಛೇರಿಯ ಮೇಲ್ಛಾವಣಿಯ ಮೇಲೆ 50ಕಿ.ವ್ಯಾ ಸಾಮರ್ಥ್ಯದ ಸೌರಶಕ್ತಿ ಫಲಕಗಳನ್ನು ಅಳವಡಿಸಲಾಗಿರುತ್ತದೆ. ಬೆವಿಕಂ ಕಛೇರಿಗೆ ಬರುವ ಗ್ರಾಹಕರಿಗೆ ಈ ಮಾದರಿಯನ್ನು ಅದರ ಉಪಯೋಗಗಳು/ ವಿದ್ಯುತ್ ಉತ್ಪಾದನೆ ಹಾಗೂ ಉಳಿತಾಯದ ಬಗ್ಗೆ ತಿಳಿಸಿಕೊಡಲಾಗುತ್ತಿದೆ.

ವಿದ್ಯುತ್ ಜಾಗೃತಿ ಯೋಜನೆಯಲ್ಲಿ ಮೆ|| ಟೆರಿ ಸಂಸ್ಥೆಯ ಮುಖಾಂತರ 50,000 ಶಾಲಾ ವಿದ್ಯಾರ್ಥಿಗಳಿಗೆ ಸೌರಶಕ್ತಿ ಮೇಲ್ಛಾವಣಿ ವ್ಯವಸ್ಥೆಯ ಬಗ್ಗೆ ಹಾಗೂ ವಿದ್ಯುತ್ ಉಳಿತಾಯದ ಬಗ್ಗೆ ಜಾಗೃತಿ ಮೂಡಿಸುವ ಕಾರ್ಯಕ್ರಮವನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಹಮ್ಮಿಕೊಳ್ಳಲಾಗಿತ್ತು.

ರಾಜ್ಯದಲ್ಲಿ 2020-21 ಮತ್ತು 2021-22ನೇ ಸಾಲಿನ (ಜುಲೈ21ರವರೆಗೆ) ಸೌರಶಕ್ತಿ ಮೇಲ್ಛಾವಣಿ ಮೂಲಕ ಉತ್ಪಾದನೆಯಾಗಿರುವ ವಿದ್ಯುತ್ ಪ್ರಮಾಣದ ಕಂಪನಿವಾರು ವಿವರಗಳು ಕೆಳಕಂಡಂತಿವೆ :-

| **ಕಂಪನಿ ಹೆಸರು** | **ಸೌರಶಕ್ತಿ ಮೇಲ್ಛಾವಣಿಯಿಂದ ಉತ್ಪಾದನೆಯಾದ ವಿದ್ಯುತ್ (ದಶಲಕ್ಷ ಯೂನಿಟ್‌ಗಳಲ್ಲಿ)** | |
|---|---|---|
| | **2020-21** | **2021-22 (ಜುಲೈ ಅಂತ್ಯಕ್ಕೆ)** |
| ಬೆಸ್ಕಾಂ | 159.64 | 18.37 |
| ಮೆಸ್ಕಾಂ | 7.06 | 2.77 |
| ಸೆಸ್ಕ್ | 33.30 | 14.77 |
| ಹೆಸ್ಕಾಂ | 25.03 | 9.69 |
| ಜೆಸ್ಕಾಂ | 8.46 | 3.25 |
| **ಒಟ್ಟು** | **233.49** | **48.85** |

ಆ) ರಾಜ್ಯದಲ್ಲಿ ಸೌರಶಕ್ತಿ ಮುಖಾಂತರ ಎಷ್ಟು ವಿದ್ಯುತ್ ಉತ್ಪಾದನೆ ಮಾಡಲು ಗುರಿ ಇಟ್ಟುಕೊಳ್ಳಲಾಗಿದೆ; ಪ್ರತಿ ಯೂನಿಟ್‌ಗೆ ಎಷ್ಟು ದರವನ್ನು ನಿಯಂತ್ರಣ ಆಯೋಗ ನಿಗದಿಪಡಿಸಿರುತ್ತದೆ;

ರಾಜ್ಯದಲ್ಲಿ ಸೌರ ನೀತಿ 2014-21 ರನ್ವಯ ಒಟ್ಟು 6,000 ಮೆ.ವ್ಯಾ. ಸೌರಶಕ್ತಿ ವಿದ್ಯುತ್ ಉತ್ಪಾದನೆ ಮಾಡಲು ಸರ್ಕಾರವು ಗುರಿ ನಿಗದಿಪಡಿಸಿರುತ್ತದೆ.

FY-22 & FY-23 ಅವಧಿಗೆ ದಿನಾಂಕ 01.04.2021 ರಿಂದ ಅನ್ವಯವಾಗುವಂತೆ ಮಾನ್ಯ ಕೆ.ಇ.ಆರ್.ಸಿ ರವರು ದಿನಾಂಕ 18.08.2021 ರಂದು ಸೌರ ಜಕಾತಿ ಆದೇಶವನ್ನು ಹೊರಡಿಸಿರುತ್ತಾರೆ. ಸದರಿ ಜಕಾತಿ ಆದೇಶದನ್ವಯ ಪ್ರತಿ ಯೂನಿಟ್ ದರ ಈ ಕೆಳಗಿನಂತಿದೆ:

| | |
|---|---|
| ಭೂ ಆಧಾರಿತ ಸೌರಶಕ್ತಿ ವಿದ್ಯುತ್ (< 5 ಮೆ.ವ್ಯಾ) ಯೋಜನೆಗಳಿಗೆ | ರೂ.3.10/- ಪ್ರತಿ ಯೂನಿಟ್ |
| 1-10 ಕಿ.ವ್ಯಾ. (ಗೃಹಬಳಕೆ ಗ್ರಾಹಕರುಗಳಿಗೆ) ಗ್ರಿಡ್ ಸಂಪರ್ಕಿತ ಸೌರ ಮೇಲ್ಛಾವಣಿ ಯೋಜನೆಗಳಿಗೆ | ರೂ. 4.02/- ಪ್ರತಿ ಯೂನಿಟ್ (ಸಬ್ಸಿಡಿ ರಹಿತ)<br>ರೂ. 2.67/- ಪ್ರತಿ ಯೂನಿಟ್ (ಸಬ್ಸಿಡಿ ಸಹಿತ) |
| 1-2000 ಕಿ.ವ್ಯಾ. (1-10 ಕಿ.ವ್ಯಾ ಗ್ರಾಹಕರುಗಳನ್ನು ಹೊರತುಪಡಿಸಿ ಮತ್ತು ಇತರ ಗ್ರಾಹಕರುಗಳಿಗೆ) ಗ್ರಿಡ್ ಸಂಪರ್ಕಿತ ಸೌರ ಯೋಜನೆಗಳಿಗೆ | ರೂ. 3.19/- ಪ್ರತಿ ಯೂನಿಟ್ |

...4

| | | |
|---|---|---|
| ಇ) | ಸೌರಶಕ್ತಿ ಮೇಲ್ಛಾವಣಿ ಘಟಕವನ್ನು ಪ್ರೋತ್ಸಾಹಿಸಲು ಬ್ಯಾಂಕ್ ಸಾಲವನ್ನು ನೀಡಲು ಸರ್ಕಾರದಿಂದ ನಿರ್ದೇಶನ ನೀಡಲಾಗಿದೆಯೇ; | ಸೌರಶಕ್ತಿ ಮೇಲ್ಛಾವಣಿ ಘಟಕವನ್ನು ಪ್ರೋತ್ಸಾಹಿಸಲು ಬ್ಯಾಂಕ್ ಸಾಲವನ್ನು ನೀಡಲು ಸರ್ಕಾರದ ಯಾವುದೇ ನಿರ್ದೇಶನ ಇರುವುದಿಲ್ಲ. |
| ಈ) | ಸರ್ಕಾರಿ ಕಟ್ಟಡಗಳಲ್ಲಿ ಮೇಲ್ಛಾವಣಿ ಘಟಕಗಳನ್ನು ಕಡ್ಡಾಯಗೊಳಿಸಲು ಸರ್ಕಾರ ಕ್ರಮ ಕೈಗೊಂಡಿದೆಯೇ; ವಿಧಾನಸೌಧ ಮತ್ತು ವಿಕಾಸಸೌಧಗಳಲ್ಲಿ ಸೌರಶಕ್ತಿ ಮೇಲ್ಛಾವಣಿ ಘಟಕ ಒದಗಿಸಲಾಗಿದೆಯೇ? | ಸರ್ಕಾರಿ ಕಟ್ಟಡಗಳ ಮೇಲ್ಛಾವಣಿಗಳಲ್ಲಿ ಸೋಲಾರ್ ವಿದ್ಯುತ್ ಘಟಕಗಳನ್ನು ಕಡ್ಡಾಯಗೊಳಿಸಲು ಸರ್ಕಾರ ವಿವಿಧ ವ್ಯವಹಾರ ಮಾದರಿಯನ್ನು ರೂಪಿಸಲು ಉದ್ದೇಶಿಸಿರುತ್ತದೆ.<br><br>ವಿಕಾಸಸೌಧ ಮೇಲ್ಛಾವಣಿಯ ಮೇಲೆ ಈಗಾಗಲೇ 100ಕಿ.ವ್ಯಾ ಸಾಮರ್ಥ್ಯದ ಸೌರಘಟಕಗಳನ್ನು ಅಳವಡಿಸಲಾಗಿದೆ ಹಾಗೂ 13ನೇ ಹಣಕಾಸು ಆಯೋಗದ ಅನುದಾನದ ಅಡಿಯಲ್ಲಿ ವಿಧಾನಸೌಧ ಹಾಗೂ ಎಂ.ಎಸ್.ಬಿಲ್ಡಿಂಗ್ ಮೇಲ್ಛಾವಣಿಯ ಮೇಲೆ ಸೌರಶಕ್ತಿ ಘಟಕ ಅಳವಡಿಸಲು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಿಂದ ಸಮೀಕ್ಷೆ ಕಾರ್ಯವು ಪೂರ್ಣಗೊಂಡಿರುತ್ತದೆ. |

ಸಂಖ್ಯೆ: ಎನರ್ಜಿ 199 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು.